# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 805

ಉತ್ತರಿಸಬೇಕಾದ ದಿನಾಂಕ : 09.03.2021

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಒಟ್ಟು ಗೃಹ ನಿರ್ಮಾಣ ಸಹಕಾರ ಸಂಘಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ದಿನಾಂಕ:31-01-2021 ರ ಅಂತ್ಯಕ್ಕೆ ಒಟ್ಟು 1807 ಗೃಹ ನಿರ್ಮಾಣ ಸಹಕಾರ ಸಂಘಗಳು ನೊಂದಣಿಯಾಗಿದ್ದು, ಈ ಪೈಕಿ ಕಾರ್ಯನಿರ್ವಹಿಸುತ್ತಿರುವ, ಸಮಾಪನಗೊಂಡಿರುವ ಮತ್ತು ಸ್ಥಗಿತಗೊಂಡಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ -1** ರಲ್ಲಿ ನೀಡಲಾಗಿದೆ. |
| ಆ) | ಅವುಗಳಲ್ಲಿ ನಿಷ್ಕ್ರಿಯಗೊಂಡಿರುವ ಸಹಕಾರ ಸಂಘಗಳು ಎಷ್ಟು? ಗೃಹ ನಿರ್ಮಾಣ ಸಂಘಗಳು ಕ್ರಿಯಾಶೀಲವಾಗಿವೆ; ಎಷ್ಟು ಸಹಕಾರ ಸಂಘಗಳನ್ನು ಪ್ರಾರಂಭಿಸಿ ನಿಗದಿತ ಮೊತ್ತವನ್ನು ಪಡೆದುಕೊಂಡಿದ್ದರೂ 10-15 ವರ್ಷಗಳಿಂದಲೂ ನಿವೇಶನ ನೀಡದೇ ವಿಳಂಬ ನೀತಿಯನ್ನು ಅನುಸರಿಸುತ್ತಿರುವ ಗೃಹ ನಿರ್ಮಾಣ ಸಂಘಗಳ ವಿರುದ್ಧ ದೂರು ದಾಖಲಿಸಿಕೊಂಡು, ಯಾವುದಾದರೂ ಕಾನೂನು ಕ್ರಮಗಳನ್ನು ಜರುಗಿಸಲಾಗಿದೆ; ಹಾಗಿದ್ದಲ್ಲಿ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ನೋಂದಣಿಯಾಗಿರುವ ಒಟ್ಟು 1807 ಸಹಕಾರ ಸಂಘಗಳ ಪೈಕಿ 145 ಗೃಹ ನಿರ್ಮಾಣ ಸಹಕಾರ ಸಂಘಗಳು ನಿಷ್ಕ್ರಿಯವಾಗಿರುತ್ತವೆ, 348 ಸಹಕಾರ ಸಂಘಗಳ ಸಮಾಪನಗೊಂಡಿರುತ್ತವೆ ಹಾಗೂ 1314 ಗೃಹ ನಿರ್ಮಾಣ ಸಹಕಾರ ಸಂಘಗಳು ಕ್ರಿಯಾಶೀಲವಾಗಿರುತ್ತವೆ.<br>ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿನ ಕಾರ್ಯನಿರ್ವಹಣೆ ಹಾಗೂ ಲೋಪಗಳ ಕುರಿತು ಇಲಾಖೆಗೆ ದೂರುಗಳು ಬಂದ ಕೂಡಲೇ, ಅಂತಹ ದೂರುಗಳನ್ನು ವ್ಯಾಪ್ತಿಯ ನಿಬಂಧಕರಿಂದ ವಿಚಾರಣೆಗೆ ಒಳಪಡಿಸಿ ದೂರುದಾರರಿಗೆ ನ್ಯಾಯ ದೊರಕಿಸಿಕೊಡುವ ಕ್ರಮ ಇಲಾಖೆಯಲ್ಲಿ ಸತತವಾಗಿ ನಡೆಯುತ್ತಿದೆ. ಕೆಲವೊಂದು ಪ್ರಕರಣಗಳಲ್ಲಿ ದೂರು ಅರ್ಜಿಗಳ ವಿಚಾರಣಾ ಹಂತದಲ್ಲಿಯೇ ದೂರುದಾರರಿಗೆ ಪರಿಹಾರ ಒದಗಿಸಲು ಸಾಧ್ಯವಾಗದ ಸಂದರ್ಭದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ವಿಚಾರಣೆಗೆ ಮತ್ತು 65 ರಡಿಯಲ್ಲಿ ಪರಿವೀಕ್ಷಣೆಗೆ ಆದೇಶಿಸಿ ಕ್ರಮಕ್ಕೆಗೊಳ್ಳಲಾಗುತ್ತಿದೆ. ಈ ರೀತಿ ಕಲಂ 64 ರ ವಿಚಾರಣಾ ವರದಿ ಮತ್ತು ಕಲಂ 65 ರ ಪರಿವೀಕ್ಷಣಾ ವರದಿಗಳನ್ನಾಧರಿಸಿ, ತಪ್ಪಿತಸ್ಥ ಸಂಘಗಳ ವಿರುದ್ಧ ಕ್ರಮಕ್ಕೈಗೊಳ್ಳಲಾಗುತ್ತಿದೆ ಹಾಗೂ ಆ ಮೂಲಕ ಸಂಘದ ಸದಸ್ಯರುಗಳಿಗೆ ಅನಾನುಕೂಲಗಳಾಗದಂತೆ ಕರ್ತವ್ಯ ನಿರ್ವಹಿಸಲು ಸಂಘಗಳಿಗೆ ನಿರ್ದೇಶನಗಳನ್ನು ನೀಡಲಾಗುತ್ತಿದೆ.<br>ಮುಂದುವರೆದು ಸದಸ್ಯರು ನಿವೇಶನ ಹಂಚಿಕೆ/ನೋಂದಣಿಗೆ ಸಂಬಂಧಿಸಿದಂತೆ ವಿಳಂಬ/ ತೊಂದರೆಗೊಳಗಾಗಿದ್ದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 70 ರಡಿಯಲ್ಲಿ ದಾವಾ ದಾಖಲಿಸಲು ಅವಕಾಶವಿದ್ದು, ಅಂತಹ ಸಂದರ್ಭಗಳಲ್ಲಿ ಅವುಗಳ ಸಮರ್ಪಕ ವಿಚಾರಣೆ ನಡೆಸಿ ಸದಸ್ಯರಿಗೆ ಪರಿಹಾರ ನೀಡುವ ಕೆಲಸವನ್ನು ಇಲಾಖೆಯಿಂದ ನಿರ್ವಹಿಸಲಾಗುತ್ತಿದೆ. |
| ಇ) | ನಿಷ್ಕ್ರಿಯಗೊಂಡಿರುವ ಗೃಹ ನಿರ್ಮಾಣ ಸಹಕಾರ ಸಂಘಗಳು ತಮ್ಮ ಸದಸ್ಯರುಗಳಿಂದ ಪಡೆದುಕೊಂಡಿರುವ ಹಣದ ಮೊತ್ತ ಮತ್ತು ಬಡ ಮಧ್ಯಮ ವರ್ಗದ ನಿವೇಶನಾಕಾಂಕ್ಷಿಗಳಿಗೆ ವಂಚನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

**ಸಿಒ 10 ಸಿಹೆಚ್‌ಎಸ್ 2021 (ಇ)**

**(ಎಸ್.ಟಿ.ಸೋಮಶೇಖರ್)**
**ಸಹಕಾರ ಸಚಿವರು**

# ಅನುಬಂಧ-1

ದಿನಾಂಕ:31-01-2021 ಕ್ಕೆ ಇದ್ದಂತೆ ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಮಾಹಿತಿ.

| ಕ್ರ | ಜಿಲ್ಲೆಯ ಹೆಸರು | ಕಾರ್ಯ ನಿರತ | ಸ್ಥಗಿತ | ಸಮಾಪನೆ | ಒಟ್ಟು |
|---|---|---|---|---|---|
| 1 | ಬೆಂಗಳೂರು 1ನೇ ವಲಯ | 136 | 9 | 19 | 164 |
| 2 | ಬೆಂಗಳೂರು 2ನೇ ವಲಯ | 106 | 4 | 17 | 127 |
| 3 | ಬೆಂಗಳೂರು 3ನೇ ವಲಯ | 59 | 4 | 5 | 68 |
| 4 | ಬೆಂಗಳೂರು 4ನೇ ವಲಯ | 191 | 0 | 19 | 210 |
| 5 | ಬೆಂಗಳೂರು ಗ್ರಾಮಾಂತರ ಜಿಲ್ಲೆ | 11 | 0 | 8 | 19 |
| 6 | ತುಮಕೂರು ಜಿಲ್ಲೆ | 29 | 1 | 15 | 45 |
| 7 | ಚಿತ್ರದುರ್ಗ ಜಿಲ್ಲೆ | 10 | 1 | 9 | 20 |
| 8 | ದಾವಣಗೆರೆ ಜಿಲ್ಲೆ | 21 | 4 | 8 | 33 |
| 9 | ಶಿವಮೊಗ್ಗ ಜಿಲ್ಲೆ | 29 | 0 | 11 | 40 |
| 10 | ಕೋಲಾರ ಜಿಲ್ಲೆ | 11 | 0 | 14 | 25 |
| 11 | ಚಿಕ್ಕಬಳ್ಳಾಪುರ ಜಿಲ್ಲೆ | 9 | 1 | 9 | 19 |
| 12 | ರಾಮನಗರ ಜಿಲ್ಲೆ | 7 | 2 | 5 | 14 |
| 13 | ಮೈಸೂರು | 259 | 7 | 21 | 287 |
| 14 | ಚಾಮರಾಜನಗರ. | 7 | 0 | 1 | 8 |
| 15 | ಮಂಡ್ಯ | 33 | 0 | 7 | 40 |
| 16 | ಹಾಸನ | 22 | 3 | 11 | 36 |
| 17 | ಚಿಕ್ಕಮಗಳೂರು | 10 | 0 | 1 | 11 |
| 18 | ಕೊಡಗು | 1 | 0 | 0 | 1 |
| 19 | ದಕ್ಷಿಣ ಕನ್ನಡ | 20 | 1 | 2 | 23 |
| 20 | ಉಡುಪಿ | 8 | 0 | 1 | 9 |
| 21 | ಬೆಳಗಾವಿ | 75 | 10 | 20 | 105 |
| 22 | ವಿಜಯಪುರ | 26 | 1 | 23 | 50 |
| 23 | ಬಾಗಲಕೋಟ | 24 | 4 | 7 | 35 |
| 24 | ಧಾರವಾಡ | 84 | 30 | 17 | 131 |
| 25 | ಗದಗ | 20 | 3 | 6 | 29 |
| 26 | ಹಾವೇರಿ | 13 | 2 | 6 | 21 |
| 27 | ಕಾರವಾರ | 13 | 0 | 3 | 16 |
| 28 | ಬಳ್ಳಾರಿ | 16 | 2 | 21 | 39 |
| 29 | ಬೀದರ | 9 | 13 | 23 | 45 |
| 30 | ಕಲಬುರಗಿ | 22 | 20 | 24 | 66 |
| 31 | ಕೊಪ್ಪಳ | 8 | 8 | 5 | 21 |
| 32 | ರಾಯಚೂರು | 19 | 13 | 6 | 38 |
| 33 | ಯಾದಗಿರಿ | 6 | 2 | 4 | 12 |
| ಒಟ್ಟು | | 1314 | 145 | 348 | 1807 |

ಸಹಕಾರ ಸಂಘಗಳ ಅಪರ ನಿಬಂಧಕರು
(ವಸತಿ ಮತ್ತು ಇತರೆ)
ಸಹಕಾರ ಸಂಘಗಳ ನಿಬಂಧಕರ ಕಛೇರಿ,
ನಂ.1, ಅಲಿ ಅಸ್ಕರ್ ರಸ್ತೆ, ಬೆಂಗಳೂರು-560 052